**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಯುವಜನ ಸೇವೆ ಹಾಗೂ ಕ್ರೀಡಾ ಸಚಿವರು ನವದೆಹಲಿಯಲ್ಲಿನ ತಮ್ಮ ಅಧಿಕೃತ ಕಾರ್ಯಕ್ರಮದಲ್ಲಿ ತಮಗೆ ಸಹಕರಿಸಲು ತಮ್ಮ ಆಪ್ತಕಾರ್ಯದರ್ಶಿಯಾದ ಶ್ರೀ ಮಿರ್ಜಾ ಅಕ್ಬರುಲ್ಲಾ ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರನ್ನು ದಿನಾಂಕ: 4.2.2005 ರಂದು ನವದೆಹಲಿಗೆ ವಿಮಾನದ ಮೂಲಕ ಕರೆದುಕೊಂಡು ಹೋಗಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 60 ಆಸೇ 2005, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2005**

ಶ್ರೀ ಮಿರ್ಜಾ ಅಕ್ಬರುಲ್ಲಾ ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಹಾಲಿ ಅಲ್ಪಸಂಖ್ಯಾತರ ಕಲ್ಯಾಣ ಯುವಜನ ಸೇವೆ ಹಾಗೂ ಕ್ರೀಡಾ ಸಚಿವರ ಆಪ್ತಕಾರ್ಯದರ್ಶಿ ಇವರು ದಿನಾಂಕ: 4.2.2005 ರಂದು ಸಚಿವರೊಂದಿಗೆ ನವದೆಹಲಿಗೆ ವಿಮಾನದಲ್ಲಿ ಹೋಗಿ ಹಿಂದಿರುಗಿರುವುದಕ್ಕೆ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಆರ್ 96 ದಿನಾಂಕ: 10.7.96 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.339

**ಎಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ :** ಶ್ರೀ ಬಿ. ಜಿ. ಮಾಳಿಗೇರ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಇಲಾಖಾ ವಿಚಾರಣೆ ಮಂಡನಾಧಿಕಾರಿಯನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 85 ಎಸ್‌ಇಎನ್ 98, ದಿನಾಂಕ: 21.12.2004.
2. ಶ್ರೀ ಬಿ. ಜಿ. ಮಾಳಿಗೇರ, ಇವರ ಪತ್ರ ದಿನಾಂಕ: 10.1.2005.
3. ಶ್ರೀ ಎಸ್. ಟಿ. ಪಾಟೀಲ್, ನಿರ್ದೇಶಕರು, ವಾಲ್ಮಿ ಧಾರವಾಡ ಇವರ ಪತ್ರ ದಿನಾಂಕ: 25.1.2005.

**ಪ್ರಸ್ತಾವನೆ:**

ಶ್ರೀ ಬಿ. ಜಿ. ಮಾಳಿಗೇರ, ನಿವೃತ್ತ ಮುಖ್ಯ ಇಂಜಿನಿಯರ್‌ರವರು ವಾಲ್ಮಿ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ ದುರ್ನಡತೆಗಳ ಸಂಬಂಧ ವಿಚಾರಣೆಯನ್ನು ನಡೆಸಲು ಮೇಲೆ ಓದಲಾದ ಉಲ್ಲೇಖ (1)ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ನೇಮಕ ಮಾಡಲಾಗಿದೆ. ಅದೇ ಆದೇಶದಲ್ಲಿ ಶ್ರೀ ಎಸ್.ಟಿ. ಪಾಟೀಲ್, ನಿರ್ದೇಶಕರು, ವಾಲ್ಮಿ ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಈ ಸಂಬಂಧ ಆರೋಪಿತ ನಿವೃತ್ತ ಅಧಿಕಾರಿಯಾದ ಶ್ರೀ ಬಿ. ಜಿ. ಮಾಳಿಗೇರ, ಅವರು ಮಂಡನಾಧಿಕಾರಿಯನ್ನು ಬದಲಾಯಿಸಲು ಹಾಗೂ ಶ್ರೀ ಎಸ್.ಟಿ. ಪಾಟೀಲ್‌ರವರು ಅವರನ್ನು ಬದಲಾಯಿಸುವ ಅವಶ್ಯಕತೆ ಇಲ್ಲವೆಂದು ಅನುಕ್ರಮವಾಗಿ ಮೇಲೆ ಓದಲಾದ ಉಲ್ಲೇಖ (2) ಮತ್ತು (3)ರ ಪತ್ರಗಳಲ್ಲಿ ಸರ್ಕಾರಕ್ಕೆ ಸಲ್ಲಿಸಿರುವ ಮನವಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 85 ಎಸ್‌ಇಎನ್ 98, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಉಲ್ಲೇಖಿಸಲಾದ ಸರ್ಕಾರಿ ಆದೇಶ ದಿನಾಂಕ: 21.12.2004 ರಲ್ಲಿ ಶ್ರೀ ಎಸ್.ಟಿ. ಪಾಟೀಲ್ ನಿರ್ದೇಶಕರು, ವಾಲ್ಮಿರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದ್ದ ಆದೇಶವನ್ನು ಮಾರ್ಪಡಿಸಿ ಅವರ ಬದಲಿಗೆ ಶ್ರೀ ಕೆ. ಆರ್. ಸೋಮಶೇಖರ್, ಅಧೀಕ್ಷಕ ಇಂಜಿನಿಯರ್, ಮಲಪ್ರಭಾ ಬಲದಂಡೆ ನಿರ್ಮಾಣ ವೃತ್ತ ಧಾರವಾಡ ಇವರನ್ನು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11(2) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.340

**ಎಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-3).

**ವಿಷಯ :** ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ ನೀಡುವ ಬಗ್ಗೆ ವಿಶೇಷ ಯೋಜನೆ

**ಓದಲಾಗಿದೆ :**
1. ದಿನಾಂಕ: 21.5.2004ರ ಭಾರತ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: 33011/97-ಓ ಅಂಡ್ ಎಂ.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಇಆಸು 2002 ದಿನಾಂಕ: 13.8.2003.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿ ಓದಲಾದ ಭಾರತ ಸರ್ಕಾರದ ದಿನಾಂಕ: 21.5.2004ರ ಅಧಿಕೃತ ಜ್ಞಾಪನದಲ್ಲಿ ಸೇವೆಯಲ್ಲಿ ಅತ್ಯುತ್ತಮ ಪ್ರಗತಿ ಸಾಧಿಸಿದ ಕೇಂದ್ರ ಸರ್ಕಾರದ ನಾಗರೀಕ ಸಿಬ್ಬಂದಿಗೆ ಪ್ರಶಸ್ತಿ/ ಪ್ರೋತ್ಸಾಹಧನ ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಿದೆ.

ಉಲ್ಲೇಖ (2)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಇಆಸು 2002 ದಿನಾಂಕ: 13.8.2003ರಲ್ಲಿ, ರಾಜ್ಯ ಸರ್ಕಾರವೂ ಸಹ ಸೇವೆಯಲ್ಲಿ ಅತ್ಯುತ್ತಮ ಪ್ರಗತಿ ಸಾಧಿಸಿದ ಕರ್ನಾಟಕ ರಾಜ್ಯ ಸರ್ಕಾರಿ ನಾಗರೀಕ ಸಿಬ್ಬಂದಿಗೆ ಪ್ರಶಸ್ತಿ/ ಪ್ರೋತ್ಸಾಹಧನ ನೀಡುವ ಬಗ್ಗೆ ವಿಶೇಷ ಯೋಜನೆಯನ್ನು ರೂಪಿಸಿ, ಪ್ರತಿಯೊಂದು ಜಿಲ್ಲಾ ಮಟ್ಟದಲ್ಲಿ 6 ಪ್ರಶಸ್ತಿಗಳನ್ನು ಹಾಗೂ ರಾಜ್ಯ ಮಟ್ಟದಲ್ಲಿ 6 ಪ್ರಶಸ್ತಿಗಳನ್ನು ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಿದೆ.

ಈ ಮಾರ್ಗಸೂಚಿಗಳನ್ವಯ, ರಾಜ್ಯಮಟ್ಟದ ಪ್ರಶಸ್ತಿಗಳ ಆಯ್ಕೆಗಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ, ಮುಖ್ಯ ಕಾರ್ಯದರ್ಶಿಯವರು ಸೂಚಿಸಿದ ಇನ್ನಿಬ್ಬರು ಸದಸ್ಯರನ್ನೊಳಗೊಂಡ (ಇಲಾಖಾ ಕಾರ್ಯದರ್ಶಿಗಳು) ಸಮಿತಿಯೊಂದನ್ನು ರಚಿಸಲಾಗಿತ್ತು. ಈ ಸಮಿತಿಯು 2004ನೇ ಸಾಲಿನ ರಾಜ್ಯ ಪ್ರಶಸ್ತಿಗಾಗಿ 6 ಜನ ರಾಜ್ಯ ಸರ್ಕಾರದ ನಾಗರೀಕ ಸಿಬ್ಬಂದಿಯನ್ನು ಆಯ್ಕೆ ಮಾಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 46 ಇಆಸು 2004, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2005**

ರಾಜ್ಯ ಸರ್ಕಾರವು 2004ನೇ ಸಾಲಿಗೆ ಕೆಳಕಂಡ 6 ಮಂದಿ ಅಧಿಕಾರಿ/ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ/ ಪ್ರೋತ್ಸಾಹಧನ ನೀಡಲು ಮಂಜೂರಾತಿ ನೀಡಿದೆ.

**ಪತ್ರಾಂಕಿತ ಅಧಿಕಾರಿಗಳು ದರ್ಜೆ-1**

1. ಶ್ರೀ ಬಿ. ಎಸ್. ಕೃಷ್ಣಪ್ರಸಾದ್
   ಕೆಎಎಸ್ ಅಧಿಕಾರಿ ನಿವಾಸಿ ಆಯುಕ್ತರ ಕಚೇರಿ ನವದೆಹಲಿ.
2. ಶ್ರೀಮತಿ ಗುಟ್ರೂಡ್ ವೇಗನ್
   ಉಪ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. ಮಂಗಳೂರು.

**ಪತ್ರಾಂಕಿತ ಅಧಿಕಾರಿಗಳು ದರ್ಜೆ-2**

1. ಶ್ರೀ ಅನಿಸ್ ಖೈಸರ್
   ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಚಿಕ್ಕಮಗಳೂರು.
2. ಶ್ರೀ ಎಸ್. ಆರ್. ದುಂಡಗಿ
   ಸಹಾಯಕ ನಿರ್ದೇಶಕರು, ಸಣ್ಣ ಉಳಿತಾಯ ಇಲಾಖೆ ಬಳ್ಳಾರಿ.

**ನಾನ್ ಗೆಜೆಟೆಡ್**

1. ಶ್ರೀಮತಿ ಡಿ. ಆರ್. ಮೈಥಿಲಿ
   ಅಧೀಕ್ಷಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
2. ಶ್ರೀ ಸಿ. ಹೆಚ್. ಹುನಮಂತಯ್ಯ,
   ಹಿರಿಯ ಸಹಾಯಕರು, ಕರ್ನಾಟಕ ಸರ್ಕಾರದ ಸಚಿವಾಲಯ

ಈ ಪ್ರಶಸ್ತಿಯು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಇಆಸು 2002 ದಿನಾಂಕ: 13.8.2003ರಲ್ಲಿ ಹೊರಡಿಸಲಾಗಿರುವ ಮಾರ್ಗಸೂಚಿಯ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಈ ಪ್ರಶಸ್ತಿ ನೀಡಲು ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2052-00-090-0-51 (ಯೋಜನೇತರ)ಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.341

**ಎಸ್. ಎಂ. ಆಚಾರ್ಯ**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಸಿಆಸುಇ (ಆಡಳಿತ ಸುಧಾರಣೆ).

**ವಿಷಯ :** ಮಾನ್ಯ ಉಪ ಮುಖ್ಯ ಮಂತ್ರಿಯವರ ಸಚಿವಾಲಯದ ಸಿಬ್ಬಂದಿಗಳಿಗೆ ವಿಧಾನ ಮಂಡಲದ ಅಧಿವೇಶನದ ಸಮಯದಲ್ಲಿ ಗೌರವಧನ ನೀಡುವ ಬಗ್ಗೆ.

**ಓದಲಾಗಿದೆ :** 1. ಆದೇಶ ಸಂಖ್ಯೆ: ಸಿಆಸುಇ 9 ಸಅಸೇ 2003 ದಿನಾಂಕ: 4.7.2003.

2. ಉಪ ಮುಖ್ಯ ಮಂತ್ರಿಯವರ ನಡವಳಿ ಸಂಖ್ಯೆ: ಉಮುಮಂ/ನ/ 967/04, ದಿನಾಂಕ: 25.8.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿನ ಆದೇಶದಲ್ಲಿ ಮಾನ್ಯ ಮುಖ್ಯ ಮಂತ್ರಿಯವರ ಆಪ್ತ ಶಾಖೆಯ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರಿಗೆ ವಿಧಾನಮಂಡಲದ ಅಧಿವೇಶನದ ಸಮಯದಲ್ಲಿ ಗೌರವ ಧನವನ್ನು ಮಂಜೂರು ಮಾಡಲಾಗುತ್ತಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯಲ್ಲಿ ಮಾನ್ಯ ಉಪ ಮುಖ್ಯ ಮಂತ್ರಿಯವರು ಈ ಸೌಲಭ್ಯವನ್ನು ಮುಖ್ಯ ಮಂತ್ರಿಯವರ ಸಚಿವಾಲಯದ ಸಿಬ್ಬಂದಿಗಳಿಗೆ ಹಾಗೂ ಸಂಸದೀಯ ವ್ಯವಹಾರಗಳ ಸಚಿವರ ಆಪ್ತ ಸಿಬ್ಬಂದಿಗೆ ನೀಡುತ್ತಿರುವುದರಿಂದ ಈ ಗೌರವ ಧನವನ್ನು, ತಾನೂ ಸಹ ವಿಧಾನ ಮಂಡಲದ ವಿಶೇಷ ಮಂಡಳಿಯ ಸದಸ್ಯನಾಗಿರುವುದರಿಂದ ತಮ್ಮ ಸಚಿವಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ: ಸಿಬ್ಬಂದಿಗಳಿಗೂ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 302 ಸಅಸೇ 2004, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2005**

ಮಾನ್ಯ ಉಪ ಮುಖ್ಯ ಮಂತ್ರಿಯವರು ವಿಧಾನ ಮಂಡಲದ ವಿಶೇಷ ಮಂಡಳಿಯ ಸದಸ್ಯರಾಗಿರುವುದರಿಂದ ಅವರ ಸಚಿವಾಲಯದ ಅಧಿಕಾರಿ: ಸಿಬ್ಬಂದಿಗೆ ವಿಧಾನ ಮಂಡಲ ಅಧಿವೇಶನದ ಅವಧಿಯಲ್ಲಿ ಗೌರವ ಧನವನ್ನು ಮಾನ್ಯ ಮುಖ್ಯ ಮಂತ್ರಿಯವರ ಕಛೇರಿಯ ಸಿಬ್ಬಂದಿಗೆ ನೀಡುತ್ತಿರುವ ದರಗಳಲ್ಲಿಯೇ ನೀಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1744 ವೆಚ್ಚ-5: 2004, ದಿನಾಂಕ: 14.12.2004ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.342

**ಎಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ. ವಿ. ಲಕ್ಷ್ಮೀಪತಿರೆಡ್ಡಿ, ತಹಶೀಲ್ದಾರ್ (ನಿವೃತ್ತ) ಇವರ ಅಮಾನತ್ತಿನ ಅವಧಿ ಕುರಿತು.

**ಓದಲಾಗಿದೆ :** 1. ದಿನಾಂಕ: 22.11.2002ರ ಸರ್ಕಾರಿ ಆದೇಶ ಸಂ. ಕಂಇ 60 ಎಡಿಇ 2002

2. ದಿನಾಂಕ: 18.06.2003ರ ಸರ್ಕಾರಿ ಆದೇಶ ಸಂ. ಕಂಇ 60 ಎಡಿಇ 2002.

3. ದಿನಾಂಕ: 10.5.2004ರ ಸರ್ಕಾರಿ ಆದೇಶ ಸಂ. ಕಂಇ 60 ಎಡಿಇ 2002

4. ದಿನಾಂಕ: 12.6.2004ರ ಆರೋಪಿತ ಅಧಿಕಾರಿಯವರ ಮನವಿ.

**ಪ್ರಸ್ತಾವನೆ:**

ಶ್ರೀ ಎಂ. ವಿ. ಲಕ್ಷ್ಮೀಪತಿರೆಡ್ಡಿ, ತಹಶೀಲ್ದಾರ್, ಇವರು ತಹಶೀಲ್ದಾರ್ ಹುದ್ದೆಗೆ ಬಡ್ತಿ ಪಡೆಯುವ ಮೊದಲು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಆಗಿರುವುದಿಲ್ಲವೆಂದು ಸರ್ಕಾರವು ಸ್ವೀಕರಿಸಿದ ದೂರುಗಳ ಹಿನ್ನಲೆಯಲ್ಲಿ ಹಾಗೂ ಇನ್ನಿತರೆ ಆರೋಪಗಳ ಮೇರೆಗೆ ಸದರಿ ಅಧಿಕಾರಿಯನ್ನು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 22.11.2002ರ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಟ್ಟು ಅಮಾನತ್ತುಗೊಳಿಸಲಾಗಿತ್ತು. ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 18.06.03ರ ಆದೇಶದಲ್ಲಿ ಅವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಲಾಯಿತು. ತದನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 10.5.2004ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಈ ಪ್ರಕರಣಕ್ಕೆ ಮಾತ್ರ ಸೀಮಿತಗೊಳಿಸಿ ಕೈಬಿಡಲಾಗಿದೆ.

ದಿನಾಂಕ: 22.11.2002ರಿಂದ 18.6.2003ರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ: 12.06.04 ರಂದು ಆರೋಪಿತ ಅಧಿಕಾರಿಯವರು ಮನವಿ ಮಾಡಿರುವುದನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿತು. ಸದರಿ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪಗಳನ್ನು ಸಾಬೀತುಪಡಿಸಲು ಕರ್ನಾಟಕ ಲೋಕಸೇವಾ ಆಯೋಗದ ಹಳೆಯ ಸಂಬಂಧಿತ ದಾಖಲೆಗಳು ಲಭ್ಯವಿಲ್ಲವೆಂದು ತಿಳಿಸಿದ್ದ ಹಿನ್ನೆಲೆಯಲ್ಲಿ ಅವರನ್ನು ಆರೋಪ ಮುಕ್ತಗೊಳಿಸಲಾಗಿದೆ. ಆದರೆ ಈ ಅಧಿಕಾರಿಯು ತನ್ನ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯಲು ಯಾವುದೇ ಮೂಲ ದಾಖಲೆಗಳನ್ನು: ಪುರಾವೆಗಳನ್ನು ಒದಗಿಸಿರುವುದಿಲ್ಲ. ಹೀಗಾಗಿ ಸರಕಾರವು ಹೊರಡಿಸಿರುವ ನಿಲಂಬನಾ ಅವಧಿಯನ್ನು ನಿಲಂಬನಾ ಅವಧಿಯೆಂದೇ ಪರಿಗಣಿಸುವುದು ಸಿಂಧುವೆನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಎಡಿಇ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100 (1)(ಬಿ)ರ ಅನ್ವಯ ಸರ್ಕಾರವು ಶ್ರೀ ಎಂ. ವಿ. ಲಕ್ಷ್ಮೀಪತಿರೆಡ್ಡಿ, ನಿವೃತ್ತ ತಹಶೀಲ್ದಾರ್ ರವರ ದಿನಾಂಕ: 22.11.2002 ರಿಂದ 18.6.2003ರ ನಿಲಂಬನಾ ಅವಧಿಯನ್ನು 'ನಿಲಂಬನಾ ಅವಧಿಯೆಂದೆ' ಪರಿಗಣಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯೊಂದಿಗೆ ಹೊರಡಿಸಲಾಗಿದೆ (ಉಲ್ಲೇಖ ಅ.ಟಿ.ಸಂಖ್ಯೆ: ಕಂಇ 37183 ಐಎಫ್ಎ 04, ದಿನಾಂಕ: 1.9.2004).

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.343

**ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು-3).

**ವಿಷಯ :** ಶ್ರೀ ಎಂ. ಎಲ್. ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಭಟ್ಕಳ ಮತ್ತು ಶ್ರೀ ಎಸ್. ಬಸವರಾಜು, ಹಿಂದಿನ ಮುಖ್ಯಾಧಿಕಾರಿ, ಭಟ್ಕಳ ಪುರಸಭೆ ಇವರುಗಳಿಗೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**

1. ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ವನಇ 97 ಡಿಎಂಕೆ 94, ದಿನಾಂಕ: 15.3.1995.
2. ದಿನಾಂಕ: 16.1.1997ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 2 ಎಡಿಇ 95
3. ವಿಚಾರಣಾಧಿಕಾರಿಗಳು, ದಿನಾಂಕ: 29.6.1998 ರಂದು ಸಲ್ಲಿಸಿರುವ ವಿಚಾರಣಾ ವರದಿ.
4. ಶ್ರೀ ಎನ್. ಬಸವರಾಜ್, ಹಿಂದಿನ ಮುಖ್ಯಾಧಿಕಾರಿ, ಭಟ್ಕಳ ಪುರಸಭೆ ಇವರಿಗೆ ದಿನಾಂಕ: 11.5.2004 ರಂದು ಜಾರಿ ಮಾಡಿರುವ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 22 ಎಡಿಇ 95.
5. ಶ್ರೀ ಎಂ. ಎಲ್. ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಭಟ್ಕಳ ಇವರಿಗೆ ದಿನಾಂಕ: 11.5.2004 ರಂದು ಜಾರಿ ಮಾಡಿರುವ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 22 ಎಡಿಇ 95.
6. ಶ್ರೀ ಎಂ. ಎಲ್. ಮಹದೇವಯ್ಯ ರವರ ದಿನಾಂಕ: 1.6.2004ರ ಲಿಖಿತ ಸಮಜಾಯಿಷಿ.
7. ಶ್ರೀ ಎಂ. ಬಸವರಾಜು ರವರ ದಿನಾಂಕ: 1.9.2004ರ ಲಿಖಿತ ಸಮಜಾಯಿಷಿ.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಭಟ್ಕಳ ಪುರಸಭೆಯಲ್ಲಿ ಅನಧಿಕೃತವಾಗಿ ಕಟ್ಟಿರುವ ಮನೆಗಳಿಗೆ ಕರಾಕರಣೆ ಮಾಡಿರುವುದಕ್ಕೆ ಕಾರಣರಾದ ಆಗಿನ ಪುರಸಭೆ ಆಡಳಿತಾಧಿಕಾರಿಯಾಗಿದ್ದ ಶ್ರೀ ಎಂ.ಎಲ್. ಮಹದೇವಯ್ಯ, ಆಗಿನ ತಹಸೀಲ್ದಾರ್, ಭಟ್ಕಳ ಹಾಗೂ ಪುರಸಭೆಯ ಆಗಿನ ಮುಖ್ಯಾಧಿಕಾರಿಯಾಗಿದ್ದ ಶ್ರೀ ಎನ್. ಬಸವರಾಜ್ ರವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಲಾಗಿದೆ ಎಂದು ತಿಳಿಸುತ್ತಾ ಸಂಬಂಧಪಟ್ಟ ದಾಖಲೆಗಳನ್ನು ಹಾಗೂ ಆರೋಪ ಪಟ್ಟಿಗಳನ್ನು ಕಳುಹಿಸಿಕೊಡಲಾಗಿತ್ತು. ಅದರಂತೆ ಶ್ರೀ ಎಂ.ಎಲ್. ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಭಟ್ಕಳ ಹಾಗೂ ಭಟ್ಕಳ ಪುರಸಭಾ ಆಡಳಿತಾಧಿಕಾರಿ ಇವರು ಶ್ರೀ ಎನ್. ಬಸವರಾಜ್, ಹಿಂದಿನ ಮುಖ್ಯಾಧಿಕಾರಿ, ಭಟ್ಕಳ ಪುರಸಭೆ ಇವರ ಜೊತೆಗೆ ಶಾಮೀಲಾಗಿ ಪುರಸಭಾ ವ್ಯಾಪ್ತಿಯಲ್ಲಿ ಬರುವ ರೆವಿನ್ಯೂ ನಿವೇಶನದಲ್ಲಿ ಅನಧಿಕೃತವಾಗಿ ಕಟ್ಟಡದ ಕೆಲವು ಮನೆಗಳಿಗೆ ಕಟ್ಟಡ ತೆರಿಗೆ ಆಕರಣೆ ಮಾಡಿರುವುದು ಹಾಗೂ ವಿದ್ಯುತ್ ಸಂಪರ್ಕ ಪಡೆಯಲು N.O.C. ನೀಡಿರುವ ಹಾಗೂ ಇನ್ನಿತರೆ ಕರ್ತವ್ಯಲೋಪ ಎಸಗಿರುವುದರಿಂದ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲು ಕಾರವಾರ ಜಿಲ್ಲಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಕ್ರಮ ಸಂಖ್ಯೆ: (2)ರ ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸಿ, ಶ್ರೀ ಎಂ.ಎಲ್. ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಭಟ್ಕಳ ಹಾಗೂ ಶ್ರೀ ಎನ್. ಬಸವರಾಜು, ಹಿಂದಿನ ಮುಖ್ಯಾಧಿಕಾರಿ, ಭಟ್ಕಳ ಪುರಸಭೆ ಇವರುಗಳ ವಿರುದ್ಧದ ಆರೋಪವು ಭಾಗಶಃ ರುಜುವಾತು ಆಗಿದೆ ಎಂದು ವಿಚಾರಣೆ ವರದಿಯಲ್ಲಿ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 29.6.98ರ ಪತ್ರದೊಂದಿಗೆ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಶ್ರೀ ಎನ್. ಬಸವರಾಜು ಇವರಿಗೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 11.5.2004ರಲ್ಲಿ ಹಾಗೂ ಶ್ರೀ ಎಂ. ಎಲ್. ಮಹದೇವಯ್ಯ ಇವರಿಗೆ ಕ್ರಮ ಸಂಖ್ಯೆ (5) ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಅದಕ್ಕನುಗುಣವಾಗಿ ಶ್ರೀ ಬಸವರಾಜು, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (7)ರಲ್ಲಿ ದಿನಾಂಕ: 1.9.2004 ರಂದು ಹಾಗೂ ಶ್ರೀ ಎಂ. ಎಲ್. ಮಹದೇವಯ್ಯ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ದಿನಾಂಕ: 1.6.2004 ರಂದು ಲಿಖಿತ ಸಮಜಾಯಿಷಿ ಸಲ್ಲಿಸಿ ಇಬ್ಬರು ಸಹ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗಳೆದಿರುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 22 ಎಡಿಇ 95, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8(3) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ಎಲ್. ಮಹದೇವಯ್ಯ, ಹಿಂದಿನ ತಹಸೀಲ್ದಾರ್, ಭಟ್ಕಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಹಾಲಿ ತಹಸೀಲ್ದಾರ್, ಚಳ್ಳಕೆರೆ ತಾಲ್ಲೂಕು ಚಿತ್ರದುರ್ಗ ಜಿಲ್ಲೆ ಹಾಗೂ ಶ್ರೀ ಎನ್. ಬಸವರಾಜು ಹಿಂದಿನ ಮುಖ್ಯಾಧಿಕಾರಿ, ಭಟ್ಕಳ ಪುರಸಭೆ, ಉತ್ತರಕನ್ನಡ ಜಿಲ್ಲೆ, ಹಾಲಿ ಸಹಾಯಕ ಪೌರಾಯುಕ್ತರು, ನಗರಸಭೆ, ಭದ್ರಾವತಿ, ಶಿವಮೊಗ್ಗ ಜಿಲ್ಲೆ ಅವರುಗಳ ತಲಾ ಒಂದೊಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.344

**ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸೇವೆಗಳು-3).

## EDUCATION SECRETARIAT

**Sub :** Re-constitution of the State Level Committee for processing of applications for starting of New polytechnics, additional courses and additional intake in existing polytechnics.

**Read :**
1. Government Order No. ED 118 TPE 2001 dated: 13.07.2001.
2. Corrigendum Order No. ED 338 TPE 2003 dated: 31.10.2003.
3. Letter No. DTE 42 DVP (2) 2004: 3584 dated: 01.12.2004 and 14.02.2005.

**Preamble:**

In the Government Order dated: 13.07.2001 read at (1) Government are pleased to constitute State Level Committee under the chairmanship of Principal Secretary, Higher Education Department for processing the following categories of application as per the guidelines framed by the A.I.C.T.E.

(a) The applications for increase in intake in the existing diploma in Engineering and Technology Institutes.

(b) The applications for the introduction of additional courses in the existing diploma in Engineering and Technology institutes.

(c) The approval for grant if extension of approval beyond the year 2001-2002 for existing diploma in Engineering and Technology Institutes.

2. In corrigendum dated: 31.10.2003 Regional Officer of A.I.C.T.E or his nominee was substituted in the place of Prof A. Sridharan, Chairman of S.W.R.O. A.I.C.T.E. Regional Officer, Bangalore, in the committee.

3. The Director of Technical Education in his letter read at (3) above has reported that Sri K.A. Krishna Murthy, Principal, Malnad College of Engineering, Hassan who is a member of the Committee has retired in July 2004. Dr. Murgesh Mudaliyar of B.M.S. College of Engineering has also retired from service. Hence the Director of Technical Education has submitted proposal for re-constitution of the State Level Committee.

4. The Government have examined the proposal submitted by Director of Technical Education and has decided to re-constitute the State Level Committee,

5. Hence this order.

**Government Order No ED 381/ 2004 Bangalore dated: 28th February 2005**

6. Government is pleased to re-constitute the State Level Committee for processing of applications for starting of New polytechnics, additional courses and additional intake in existing polytechnics in Karnataka with following members.

| | | | |
|---|---|---|---|
| 01. | Principal Secretary to Government, Higher Education Department. | : | Chairman |
| 02. | Regional Officer, S.W.R.O., A.I.C.T.E, Bangalore or his nominee | : | Member |
| 03. | Prof. Y.D. Mythri<br>Principal, P.D.A. Engineering College, Gulbarga | : | Member |
| 04. | Dr. Sangameswar,<br>S. J. College of Engineering, Mysore. | : | Member |
| 05. | Director of Technical Education, Bangalore. | : | Member Secretary. |

By Order and in the name of the Governor of Karnataka,

**K. S. VENUGOPAL**

PR-345

Under Secretary to Government,
Education Department.

## ಕಾನೂನು ಸಚಿವಾಲಯ

**ವಿಷಯ :** 2004-2005ನೇ ಸಾಲಿಗೆ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಒದಗಿಸಿರುವ ಸಹಾಯಾನುದಾನದಲ್ಲಿ ಬಾಕಿ ಉಳಿದಿರುವ ರೂ. 34.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಇದೇ ಸಮ ಸಂಖ್ಯೆಯ ದಿನಾಂಕ: 07.08.2004ರ ಸರ್ಕಾರಿ ಆದೇಶ.
2. ಇದೇ ಸಮ ಸಂಖ್ಯೆಯ ದಿನಾಂಕ: 24.11.2004ರ ಸರ್ಕಾರಿ ಆದೇಶ.
3. ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ, ಬೆಂಗಳೂರು ಇವರ ಪತ್ರ ಸಂಖ್ಯೆ: ಕರಾಕಾಸೇಪ್ರಾ: ಅಕೌಂಟ್ಸ್:87: 2003-04 2004-05 ದಿನಾಂಕ: 21.12.2004.

**ಪ್ರಸ್ತಾವನೆ:**

2004-05ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಉಚಿತ ಕಾನೂನು ನೆರವು, ಕಾನೂನು ಸಾಕ್ಷರತಾ ಅಂದೋಳನ ಕಾರ್ಯಕ್ರಮ, ಕಾನೂನು ಶಿಬಿರದ ಮೂಲಕ ಉಚಿತ ಕಾನೂನು ಸಲಹೆ ನೀಡುವುದು ಹಾಗೂ ಜನತಾ ನ್ಯಾಯಾಲಯ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಲು ರೂ. 104.00 ಲಕ್ಷಗಳನ್ನು ಸಹಾಯಾನುದಾನವಾಗಿ ಒದಗಿಸಿದ್ದು ಅದರಲ್ಲಿ ಸದರಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, ಪ್ರಾಧಿಕಾರದ ಕೋರಿಕೆಯ ಮೇರೆಗೆ, ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ರೂ. 30.00 ಲಕ್ಷಗಳನ್ನು ಹಾಗೂ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 40.00 ಲಕ್ಷಗಳನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರವು ಮೇಲೆ ನಮೂದಿಸಲಾಗಿರುವ ಕಾರ್ಯಕ್ರಮಗಳನ್ನು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರಗಳು ಮತ್ತು ತಾಲ್ಲೂಕು ಕಾನೂನು ಸೇವಾ ಸಮಿತಿಗಳ ವೇತನ ಮತ್ತು ಗುರಿಯೋಜನೆ ಕಾರ್ಯಕ್ರಮಗಳಾದ ಕಾನೂನು ಸೇವಾ ಕಾರ್ಯಕ್ರಮ ಮತ್ತು ಕಾನೂನು ಸಾಕ್ಷರತಾ ಕಾರ್ಯಕ್ರಮಗಳ ವೆಚ್ಚಗಳಿಗಾಗಿ ಬಜೆಟ್‌ನಲ್ಲಿ ಸಹಾಯಾನುದಾನಕ್ಕೆ ಒದಗಿಸಿರುವ ಒಟ್ಟು ಹಣದಲ್ಲಿ ಬಿಡುಗಡೆ ಮಾಡಬೇಕಾಗಿರುವ ಬಾಕಿ ಮೊತ್ತ ರೂ. 34.00 ಲಕ್ಷಗಳನ್ನು ಅತಿ ಶೀಘ್ರವಾಗಿ ಬಿಡುಗಡೆ ಮಾಡುವಂತೆ ಮೇಲೆ, (3)ರಲ್ಲಿ ಓದಲಾದ ದಿನಾಂಕ: 21.12.2004ರ ಪತ್ರದಲ್ಲಿ ಕೋರಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 18 ಎಲ್‌ಎಡಿ 2004, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2005**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರಕ್ಕೆ 2004-05ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2235-60-200-5-01-101 ರಡಿಯಲ್ಲಿ ಒದಗಿಸಲಾಗಿರುವ ಸಹಾಯಾನುದಾನದಲ್ಲಿ ಬಾಕಿ ಉಳಿದಿರುವ ರೂ. 34.00 ಲಕ್ಷಗಳನ್ನು (ರೂಪಾಯಿ ಮೂವತ್ತು ನಾಲ್ಕು ಲಕ್ಷಗಳನ್ನು ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರು ಮಾಡಿದೆ.

1) ಯೋಜಿತ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವ ಕುರಿತು ವಿವರವಾದ ವರದಿ ನೀಡುವುದು.
2) ಪ್ರಸ್ತುತ ಮಂಜೂರು ಮಾಡಲಾಗಿರುವ ಸಹಾಯಾನುದಾನಕ್ಕೆ ಉಪಯೋಗಿ ಪ್ರಮಾಣ ಪತ್ರವನ್ನು ಸಲ್ಲಿಸುವುದು. (Utilization Certificate).
3) ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಯಾವ ಯಾವ ಉಪ ಲೆಕ್ಕ ಶೀರ್ಷಿಕೆಗಳಿಗೆ ಉಪಯೋಗಿಸಲಾಗಿದೆ ಎಂಬುದರ ಬಗ್ಗೆ ಮಾಹಿತಿ.

ಈ ಮೊತ್ತದ ಅನುದಾನ ಬಿಲ್ಲಿಗೆ ಸರ್ಕಾರದ ಕಾನೂನು ಇಲಾಖಾ ಕಾರ್ಯದರ್ಶಿಯವರ ಮೇಲು ರುಜು ಪಡೆಯುವ ಮೂಲಕ ಹಣ ಪಡೆಯಲು ಸೂಚಿಸಿದೆ.

ಈ ಬಗೆಗಿನ ಬಿಲ್ಲು ಪೇಯಿ ಸ್ವೀಕೃತಿಯ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 02 ಎಫ್‌ಆರ್ 2003 ದಿನಾಂಕ: 22.01.04ರ ಅನ್ವಯ ಕ್ರಮ ಜರುಗಿಸುವ ಷರತ್ತಿಗೆ ಒಳಪಟ್ಟಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣೆ ಸಂಖ್ಯೆ: ಆಇ 54 ವೆಚ್ಚ-7:05 ದಿನಾಂಕ: 02.02.2005ರಲ್ಲಿ ನೀಡಲಾಗಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಎಸ್. ಈಶ್ವರ ಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ, ಆಡಳಿತ-2.

ಪಿ.ಆರ್. 346

**ವಿಷಯ :** ಗದಗ್ ಜಿಲ್ಲೆ ಮುಂಡರಗಿ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 10.12.2003ರ ಸಾರ್ವಜನಿಕರ ಮನವಿ
2. ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಗದಗ್ ಇವರ ಪತ್ರ ದಿನಾಂಕ: 19.4.04.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 10.12.03ರ ಪತ್ರದಲ್ಲಿ ಮುಂಡರಗಿ ತಾಲ್ಲೂಕಿನ ಸಾರ್ವಜನಿಕರು ಮುಂಡರಗಿ ತಾಲ್ಲೂಕು 52 ಹಳ್ಳಿಗಳನ್ನು ಒಳಗೊಂಡಿದ್ದು ಬಹಳಷ್ಟು ಜನಸಂಖ್ಯೆ ಹೊಂದಿರುವುದರಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆ ಸೃಜಿಸುವಂತೆ ಕೋರಿರುವುದನ್ನು ಪರಿಶೀಲಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 19.4.04ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು ಗದಗ್ ಇವರು ಮುಂಡರಗಿ ತಾಲ್ಲೂಕಿನಲ್ಲಿ ಇಬ್ಬರು ನೋಟರಿಗಳು ಕಾರ್ಯನಿರ್ವಹಿಸುತ್ತಿರುತ್ತಾರೆ ಆದರೂ ಹೆಚ್ಚುವರಿಯಾಗಿ ಒಂದು ಹುದ್ದೆ ಸೃಜಿಸುವ ಅಗತ್ಯತೆ ಇದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಹಿನ್ನಲೆಯಲ್ಲಿ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 13 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 29ನೇ ಜನವರಿ 2005**

ಗದಗ್ ಜಿಲ್ಲೆ ಮುಂಡರಗಿ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಎಸ್. ಈಶ್ವರ ಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ, (ಆಡಳಿತ-2).

ಪಿ.ಆರ್. 347

**INFRASTRUCTURE DEVELOPMENT SECRETARIAT**

**Sub :** Release of funds for Sholapur-Gadag Guage Conversion Project-regarding.

**Read :**
1. G. O. No. IDD 1 NSW 2003 dated: 03.03.2003.
2. G. O. No. IDD 1 NSW 2003 dated: 29.03.2003.
3. G. O. No. IDD 40 NSW 2003 dated: 16.09.2003.
4. G. O. No. IDD 95 NSW 2003 dated: 22.1.2004.
5. G. O. No. IDD 42 NSW 2004 dated: 16.06.2004.
6. Letter from the Chief Administrative Officer (Constructions) South Western Railway, Bangalore Dated: 12.10.2004.
7. U. O. Note No. IDD 114 IDM 2004, dated: 30.12.2004.
8. G. O. No. FD 45 BRS 05 dated: 28.1.2005.

**Preamble:**

1. Government of Karnataka have so far released Rs. 16 Crores (Rupees Sixteen Crores only) as its share of cost towards Sholapur-Gadag Guage Conversion Project to the Railways vide the Government Orders read at Sl.No. 1 to 5 above.

2. The Chief Administrative Officer (Construction), South Western Railway, Bangalore, in his letter dated: 12.10.2004 read Sl. No. 6 above has requested the State Government to release the balance of deposits of Rs. 34.59 crores being the share of the Government of Karnataka incurred by the Railways towards the above project. He has further stated that due to non-release of funds from Govt. of Karnataka, they are constrained to slow down further construction activities of the Project which may ultimately lead to postponing target of commissioning of the Project indefinitely.

3. In the present year's budget an allocation of Rs. 3.00 crores was made and the same has been released vide G.O. dated: 16.6.2004 read at Sl.No. (5) above. The IDD had requested the Finance Department vide UO Note dated: 30.12.2004 read at Sl.No. (7) above, to provide supplementary grants of Rs. 20.00 Crores to the Bijapur-Gadag guage conversion project.

4. The Finance Department in its Govt. Order dated: 28.1.05 read at (7) above has accorded sanction for appropriation of a sum of Rs. 20 crores (Rupees Twenty crores only) out of the available provision under the head of Account "5465-01-190-2-02-100 (Plan)-State Support to the Project-Financial Assistance/Relief' to the head of account "5465-01-190-3-03-211- Sholapur-Gadag Gauge Conversion Project-Investments (Plan)".

5. The effect of such diversion on the requirement of funds for the Bangalore International Airport Project has been examined. Hence this Order.

**Government Order No IDD 21 NSW 2005 Bangalore dated: 22nd February 2005**

1. In circumstances stated above, Government is pleased to release Rs. 20 crores (Rupees Twenty Crores only) towards the State Government share of 50% on Solapur-Gadag Gauge Conversion Project.

2. This expenditure shall be met from the sanction accorded to the reappropriation under the head of account "5465-01-190-2-02-100 BIAP State Support to the project to the head of account "5465-01-190-3-03-211- Sholapur-Gadag Guage Conversion Project-investments (Plan)".

3. The Managing Director iDeck is authorized to draw the amount through a payee's receipt duly countersigned by the Under Secretary to Government, Infrastructure Development Department and iDeck shall in turn deposit the same with the Financial Adviser and Chief Accounts Officer, (Construction), South Western Railway, Bangalore.

4. The Chief Engineer, (Con), SWR, shall arrange to furnish monthly expenditure statement to the Infrastructure Development Department by the 5th of the succeeding month.

5. This Order issues in accordance with the Finance Department's sanction vide G.O. No. FD 45 BRS 05, dated: 28.01.2005.

By Order and in the name of the Governor of Karnataka,

**T. B. RENUKA PRASAD**

PR-348

Under Secretary to Government,
Infrastructure Development Department.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಶ್ರೀ ಆರ್. ಆರ್. ದೊಡ್ಡಿಹಾಳ, ಅಧೀಕ್ಷಕ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ವೃತ್ತ, ಧಾರವಾಡ ಇವರನ್ನು ವಿಶ್ವಬ್ಯಾಂಕಿನ ತಾಂತ್ರಿಕ ನೆರವಿನ ಯೋಜನೆಯಡಿ ವಿದೇಶಿ ವ್ಯಾಸಂಗ ಪ್ರವಾಸಕ್ಕಾಗಿ ನಿಯೋಜಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ನ್ಯಾಷನಲ್ ರೂರಲ್ ರೋಡ್ಸ್ ಡೆವಲಪ್‌ಮೆಂಟ್ ಏಜೆನ್ಸೀಸ್‌ಯು, ಡೈರೆಕ್ಟರ್ (ಪ್ರಾಜೆಕ್ಟ್-2) ಇವರ ಪತ್ರ ಸಂಖ್ಯೆ: ಎಂ-16011/60/2004-ಪಿ-2/26 ದಿನಾಂಕ: 31.1.2005.
2. ಶ್ರೀ ಆರ್. ಆರ್. ದೊಡ್ಡಿಹಾಳ, ಅಧೀಕ್ಷಕ ಅಭಿಯಂತರರು, ಇವರ ದಿನಾಂಕ: 4.2.2005ರ ಮನವಿ.

**ಪ್ರಸ್ತಾವನೆ:**

ನವದೆಹಲಿಯ ನ್ಯಾಷನಲ್ ರೂರಲ್ ರೋಡ್ಸ್ ಡೆವಲಪ್‌ಮೆಂಟ್ ಏಜೆನ್ಸಿಯ, ಇದರ ಡೈರೆಕ್ಟರ್ (ಪ್ರಾಜೆಕ್ಟ್-2) ದಿನಾಂಕ: 31.1.2005ರ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಶ್ರೀ ಆರ್. ಆರ್. ದೊಡ್ಡಿಹಾಳ, ಅಧೀಕ್ಷಕ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ವೃತ್ತ, ಧಾರವಾಡ ಇವರನ್ನು ವಿಶ್ವಬ್ಯಾಂಕಿನ ತಾಂತ್ರಿಕ ನೆರವಿನಡಿ ವಿಯಟ್ನಾಮ್‌ನಲ್ಲಿ ದಿನಾಂಕ: 21.2.2005 ರಿಂದ 06.03.2005 ರವರೆಗೆ ನಡೆಯುವ ವ್ಯಾಸಂಗ ಪ್ರವಾಸಕ್ಕೆ ಆಯ್ಕೆ ಮಾಡಿರುವುದಾಗಿ ತಿಳಿಸಿರುತ್ತಾರೆ. ಶ್ರೀ ಆರ್. ಆರ್. ದೊಡ್ಡಿಹಾಳ, ಅಧೀಕ್ಷಕ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ವೃತ್ತ, ಧಾರವಾಡ ಇವರು ತಾವು ಸದರಿ ವ್ಯಾಸಂಗ ತರಬೇತಿಗೆ ತೆರಳಲು ಅನುಮತಿ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕೋರಿರುತ್ತಾರೆ.

ಶ್ರೀ ಆರ್. ಆರ್. ದೊಡ್ಡಿಹಾಳ, ಅಧೀಕ್ಷಕ ಅಭಿಯಂತರರು ಇವರನ್ನು ಭಾರತ ಸರ್ಕಾರದ ನ್ಯಾಷನಲ್ ರೂರಲ್ ರೋಡ್ಸ್ ಡೆವಲಪ್‌ಮೆಂಟ್ ಏಜೆನ್ಸಿಯು ವಿಯಟ್ನಾಮ್‌ನಲ್ಲಿ ದಿನಾಂಕ: 21.2.2005 ರಿಂದ 06.03.2005 ರವರೆಗೆ ನಡೆಯುವ ವ್ಯಾಸಂಗ ಪ್ರವಾಸಕ್ಕೆ ಆಯ್ಕೆ ಮಾಡಿರುವುದರಿಂದ ಹಾಗೂ ಇದಕ್ಕೆ ತಗಲುವ ವೆಚ್ಚವನ್ನು ಭಾರತ ಸರ್ಕಾರದ ನ್ಯಾಷನಲ್ ರೂರಲ್ ರೋಡ್ಸ್ ಡೆವಲಪ್‌ಮೆಂಟ್ ಏಜೆನ್ಸಿಯೇ ಭರಿಸುವುದರಿಂದ ಇವರನ್ನು ಸದರಿ ತರಬೇತಿಗೆ ಕಳುಹಿಸಲು ಸರ್ಕಾರವು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 26 ಜಿಪಅ 2005, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಆರ್. ಆರ್. ದೊಡ್ಡಿಹಾಳ, ಅಧೀಕ್ಷಕ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ವೃತ್ತ, ಧಾರವಾಡ ಇವರನ್ನು ಭಾರತ ಸರ್ಕಾರದ ನ್ಯಾಷನಲ್ ರೂರಲ್ ರೋಡ್ಸ್ ಏಜೆನ್ಸಿಯು ಅಂತರರಾಷ್ಟ್ರೀಯ ತರಬೇತಿಗಾಗಿ ವಿಯಟ್ನಾಮ್‌ನಲ್ಲಿ ದಿನಾಂಕ: 21.2.2005 ರಿಂದ 06.03.2005 ರವರೆಗೆ ನಡೆಯುವ ವ್ಯಾಸಂಗ ಪ್ರವಾಸಕ್ಕೆ ನಿಯೋಜಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸಿ. ಸುಂದರ**

ಪಿ.ಆರ್.349

ಸರ್ಕಾರದ ಅಧೀನ ಕಾರ್ಯದರ್ಶಿ, (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಮಾತೆ ಕಾಳಿಕಾದೇವಿ ಮಹಿಳಾ ವಿದ್ಯಾಸಂಸ್ಥೆ, ಚನ್ನಗಿರಿ, ದಾವಣಗೆರೆ ಜಿಲ್ಲೆ ಇವರಿಗೆ 2004-05ನೇ ಸಾಲಿನಲ್ಲಿ 20 ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 276 ಯೋಸಕಾ 2003, ದಿನಾಂಕ: 08.07.2003.
2. ಕಾರ್ಯದರ್ಶಿ, ಶ್ರೀ ಮಾತೆ ಕಾಳಿಕಾದೇವಿ ಮಹಿಳಾ ವಿದ್ಯಾ ಸಂಸ್ಥೆ ಚನ್ನಗಿರಿ, ದಾವಣಗೆರೆ ಜಿಲ್ಲೆ ಅವರ ಮನವಿ ದಿನಾಂಕ: 8.12.2004
3. ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತರ ಭಾಷಾ ಶಾಲೆಗಳ ನಿರ್ದೇಶನಾಲಯ ಬೆಂಗಳೂರು ಅವರ ಪತ್ರದ ಸಂಖ್ಯೆ: ಎಂ.ಸಿ/ಎಂ.ಸಿ.ಟಿ.ಟಿ/ ಹೆ.ದಾ.23/2004-05 ದಿನಾಂಕ: 1.1.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 08.07.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಮಾತೆ ಕಾಳಿಕಾದೇವಿ ವಿದ್ಯಾಸಂಸ್ಥೆ, ಚನ್ನಗಿರಿ, ದಾವಣಗೆರೆ ಜಿಲ್ಲೆ ಇವರಿಗೆ ಚನ್ನಗಿರಿಯಲ್ಲಿ 2003-04ನೇ ಶೈಕ್ಷಣಿಕ ವರ್ಷದಿಂದ ಅಂಗವಿಕಲರ ಸಮನ್ವಯ ಶಿಕ್ಷಣದನ್ವಯ ಸಂಪನ್ಮೂಲ ಶಿಕ್ಷಕರ ಮಲ್ಟಿಕೆಟಗರಿ ಶಿಕ್ಷಣದ ಶಿಕ್ಷಕರ ತರಬೇತಿ (ಎಂ.ಸಿ.ಟಿ.ಟಿ) ಕೇಂದ್ರವನ್ನು 30 ಅಭ್ಯರ್ಥಿಗಳನ್ನು ದಾಖಲಿಸಿಕೊಳ್ಳುವ ಮೂಲಕ ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡಲಾಗಿತ್ತು. ಸದರಿ ಸಂಸ್ಥೆಯ ಕಾರ್ಯದರ್ಶಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 8.12.2004ರಲ್ಲಿ ಮನವಿ ಸಲ್ಲಿಸಿ 2004-05ನೇ ಸಾಲಿಗೆ 30 ಅಭ್ಯರ್ಥಿಗಳಿಗೆ ಬದಲಾಗಿ 50 ಅಭ್ಯರ್ಥಿಗಳನ್ನು ಅನಿವಾರ್ಯವಾಗಿ ದಾಖಲಿಸಿಕೊಂಡಿದ್ದು, ಸೌಲಭ್ಯಗಳನ್ನು ಹೊಂದಿರುವುದರಿಂದ ಹೆಚ್ಚುವರಿ 20 ಅಭ್ಯರ್ಥಿಗಳನ್ನು ದಾಖಲಿಸಿಕೊಂಡಿರುವುದಕ್ಕೆ ಅನುಮತಿ ನೀಡಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತರ ಭಾಷಾ ಶಾಲೆಗಳು ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 1.1.2005ರ ತಮ್ಮ ಪತ್ರದಲ್ಲಿ ಸಂಸ್ಥೆಯು 50 ಅಭ್ಯರ್ಥಿಗಳಿಗೆ ತರಬೇತಿ ನೀಡಲು ಅವಶ್ಯವೆನಿಸುವ ಮೂಲಭೂತ ಸೌಲಭ್ಯಗಳನ್ನು ಹೊಂದಿದ್ದು, ಹೆಚ್ಚುವರಿ 20 ಅಭ್ಯರ್ಥಿಗಳ ದಾಖಲಾತಿಗೆ ಅನುಮತಿ ನೀಡಬಹುದೆಂದು ಶಿಫಾರಸ್ಸು ಮಾಡಿದ್ದಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 276 ಯೋಸಕಾ 2004, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2005**

**(ಇಡಿ 124 ಸ್ವೀಮರ (ಯೂನಿಕ್) 2005, ದಿನಾಂಕ: 1ನೇ ಮಾರ್ಚ್ 2005)**

ಸರ್ಕಾರವು ಶ್ರೀ ಮಾತೆ ಕಾಳಿಕಾದೇವಿ ಮಹಿಳಾ ವಿದ್ಯಾಸಂಸ್ಥೆ, ಚನ್ನಗಿರಿ, ದಾವಣಗೆರೆ ಜಿಲ್ಲೆ ಇವರು ಈ ಸಂಸ್ಥೆಯು ಎಂ.ಸಿ.ಟಿ.ಟಿ. ತರಬೇತಿಗೆ 2004-05ನೇ ಸಾಲಿನಲ್ಲಿ 20 ಅಭ್ಯರ್ಥಿಗಳನ್ನು ಹೆಚ್ಚುವರಿಯಾಗಿ ದಾಖಲಿಸಿಕೊಂಡಿರುವುದಕ್ಕೆ ಅಭ್ಯರ್ಥಿಗಳ ಹಿತದೃಷ್ಟಿಯಿಂದ ಹಾಗೂ ಮಾನವೀಯತೆಯ ದೃಷ್ಟಿಯಿಂದ ಈ ಮೂಲಕ ಘಟನೋತ್ತರ ಅನುಮತಿ ನೀಡುತ್ತದೆ ಹಾಗೂ 2004-05ನೇ ಸಾಲಿನಿಂದ ದಾಖಲಾತಿ 50ನ್ನು ಮೀರಬಾರದು. ಹಾಗೆಯೇ ರಿಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾದ ಮಾನ್ಯತೆಯನ್ನು ಪಡೆಯುವುದು. ಮುಂದೆ ಈ ರೀತಿ ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಳ್ಳುವುದರ ವಿರುದ್ಧ ಸಂಸ್ಥೆಗೆ ಎಚ್ಚರಿಕೆ ನೀಡಲಾಗಿದೆ. ಒಂದು ವೇಳೆ ಮಾಡಿಕೊಂಡಲ್ಲಿ ಅಥವಾ ಆರ್.ಸಿ.ಐ. ಮಾನ್ಯತೆ ಪಡೆಯದಿದ್ದಲ್ಲಿ ಪರವಾನಗಿಯನ್ನೇ ರದ್ದುಪಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.350

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, (ಯೋಜನೆ),

ಶಿಕ್ಷಣ ಇಲಾಖೆ.

**ವಿಷಯ :** ತಾಂತ್ರಿಕ ಶಿಕ್ಷಣ ಇಲಾಖೆ ಅನುದಾನ ಸಂಹಿತೆಯ ಅಡಿಯಲ್ಲಿ ಕರ್ನಾಟಕದ ಮೂರು ಚಿತ್ರಕಲಾ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯವರ ವೇತನಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. 3 ಚಿತ್ರಕಲಾ ಕಾಲೇಜುಗಳ ಪ್ರಾಂಶುಪಾಲರುಗಳ ಪತ್ರ ದಿನಾಂಕ: 3.8.2004.

2. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 48 ಬಿಆರ್‌ಎಸ್ 2005, ದಿನಾಂಕ: 29.1.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 03.08.2004ರ ಪತ್ರದಲ್ಲಿ 3 ಕಲಾ ಕಾಲೇಜುಗಳಿಗೆ ತಾಂತ್ರಿಕ ಶಿಕ್ಷಣ ಇಲಾಖೆಯು ನಿಗದಿತ ವೇತನ ಅನುದಾನ ಬಿಡುಗಡೆ ಮಾಡುತ್ತಾ ಬಂದಿರುತ್ತದೆ ಎಂದು ತಿಳಿಸುತ್ತಾ, 2003-04ನೇ ಸಾಲಿನಲ್ಲಿ ನಿಗದಿತ ವೇತನದಲ್ಲಿ ಶೇ. 60ರಷ್ಟು ಕಡಿತಗೊಳಿಸಲಾಗಿದ್ದು, ಸಿಬ್ಬಂದಿಯವರಿಗೆ ವೇತನ ನೀಡಲು ಆರ್ಥಿಕ ತೊಂದರೆಯಿಂದ ಬಹಳ ಕಷ್ಟವಾಗಿದೆ ಎಂದು ಪ್ರಸ್ತುತ ಸಾಲಿನಲ್ಲಿ ಇದುವರೆವಿಗೂ ನಿಗದಿತ ವೇತನ ಅನುದಾನದ ಪಾಲು ಸಹ ಬಿಡುಗಡೆ ಮಾಡಿಲ್ಲ ಇದರಿಂದ ವೇತನ ನೀಡಲು ಕಷ್ಟಕರವಾಗಿದೆಯೆಂದು ಅನುದಾನ ಸಂಹಿತೆಯಂತೆ ಸಿಬ್ಬಂದಿಯವರ ತ್ರಿ ವಿಧ ಸೌಲಭ್ಯಗಳನ್ನೊಳಗೊಂಡಂತೆ ಶೇಕಡ 85 ರಷ್ಟು ವೇತನ ಅನುದಾನ ಮಂಜೂರು ಮಾಡಿ ಬಿಡುಗಡೆ ಮಾಡಲು ಆದೇಶ ನೀಡುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2004-05ನೇ ಸಾಲಿಗೆ ಯೋಜನೆ, ಲೆಕ್ಕಶೀರ್ಷಿಕೆ 2203-00-104-0-01-101 ರಡಿಯಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಗೆ ಹೆಚ್ಚುವರಿಯಾಗಿ ಅನುದಾನವನ್ನು ರೂ. 2030.45 ಲಕ್ಷ (ರೂಪಾಯಿ ಎರಡು ಸಾವಿರ ಮೂವತ್ತು ಲಕ್ಷ ಮತ್ತು ನಲವತ್ತೈದು ಸಾವಿರಗಳು ಮಾತ್ರ) ಗಳನ್ನು ಸಹಾಯಾನುದಾನ ತಾಂತ್ರಿಕ ಶಿಕ್ಷಕರುಗಳ ವೇತನ ವೆಚ್ಚಕ್ಕಾಗಿ ಬಿಡುಗಡೆ ಮಾಡಲಾಗಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಪರಿಷ್ಕರಿಸಿ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 211 ಯೋಯೋಕಾ 2005, ಬೆಂಗಳೂರು ದಿನಾಂಕ: 28ನೇ ಫೆಬ್ರವರಿ 2005**

**(ಇಡಿ 121 ಸ್ವೀಮರ (ಯೂನಿಕ್) 2005, ದಿನಾಂಕ: 28ನೇ ಫೆಬ್ರವರಿ 2005)**

ತಾಂತ್ರಿಕ ಶಿಕ್ಷಣ ಇಲಾಖೆ ಅನುದಾನ ಸಂಹಿತೆಯ ಅಡಿಯಲ್ಲಿ ಕರ್ನಾಟಕದ ಮೂರು ಚಿತ್ರಕಲಾ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯವರ ವೇತನ ಅನುದಾನಕ್ಕಾಗಿ 2004-05ನೇ ಸಾಲಿಗೆ ಲೆಕ್ಕಶೀರ್ಷಿಕೆ 2203-00-104-0-01-101 (ಯೋಜನೆ) ಇದರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ರೂ. 2035.45 ಲಕ್ಷ ಬಿಡುಗಡೆಗೊಳಿಸಲಾದ ಮೊತ್ತದೊಳಗೆ ಉಳಿತಾಯವಾಗುವ ಮೊತ್ತದಲ್ಲಿ ರೂ.20.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತು ಲಕ್ಷಗಳು ಮಾತ್ರ) ಮೂರು ಚಿತ್ರಕಲಾ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯವರ ವೇತನಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಈ ಬಗ್ಗೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಡ್ರಾ ಮಾಡುವ ಅಧಿಕಾರವನ್ನು ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆರವರ ಅ.ಟಿ.ಸಂಖ್ಯೆ: ಶಿಇ 220 ಐಎಫ್ (ಬಿಎ)2005, ದಿನಾಂಕ: 26.2.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.351

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, (ಯೋಜನೆ), ಶಿಕ್ಷಣ ಇಲಾಖೆ.

**ವಿಷಯ :** ವೀರಭಾರತಿ ಅಂಗವಿಕಲರ ಕ್ಷೇಮಾಭಿವೃದ್ಧಿ ಸಂಸ್ಥೆ, ಬಿಜಾಪುರ ಜಿಲ್ಲೆ ಇವರಿಗೆ ಎಂ.ಸಿ.ಟಿ.ಟಿ. ತರಬೇತಿಗೆ ಹೆಚ್ಚುವರಿ 20 ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಿರುವುದಕ್ಕೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 31 ಯೋಸಕಾ 2004, ದಿನಾಂಕ: 02.6.2004.

2. ಅಧ್ಯಕ್ಷರು, ವೀರಭಾರತಿ ಅಂಗವಿಕಲರ ಕ್ಷೇಮಾಭಿವೃದ್ಧಿ ಸಂಸ್ಥೆ, ಬಿಜಾಪುರ ಜಿಲ್ಲೆ ಅವರ ಮನವಿ ದಿನಾಂಕ: 16.01.04.

3. ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾಂತರ ಭಾಷಾ ಶಾಲೆಗಳ ನಿರ್ದೇಶನಾಲಯ, ಬೆಂಗಳೂರು ಅವರ ಪತ್ರದ ಸಂಖ್ಯೆ: ಎಂ.ಸಿ1/ಎಂ.ಸಿ.ಟಿ.ಟಿ/ಹೆ.ದಾ.ಅ/13/2004-05, ದಿನಾಂಕ: 30.11.2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 2.06.2004ರ ಸರ್ಕಾರಿ ಆದೇಶದಲ್ಲಿ ವೀರ ಭಾರತಿ ಅಂಗವಿಕಲ ಕ್ಷೇಮಾಭಿವೃದ್ಧಿ ಸಂಸ್ಥೆ, ಬಿಜಾಪುರ ಜಿಲ್ಲೆ ಇವರಿಗೆ 2004-05ನೇ ಶೈಕ್ಷಣಿಕ ವರ್ಷದಿಂದ ಅಂಗವಿಕಲರ ಸಮನ್ವಯ ಶಿಕ್ಷಣದನ್ವಯ ಸಂಪನ್ಮೂಲ ಶಿಕ್ಷಕರ ಎಂ.ಸಿ.ಟಿ.ಟಿ. ತರಬೇತಿ ಕೇಂದ್ರವನ್ನು 30 ಅಭ್ಯರ್ಥಿಗಳನ್ನು ದಾಖಲಿಸಿಕೊಳ್ಳುವುದರೊಡನೆ ಪ್ರಾರಂಭಿಸಲು ಅನುಮತಿ ನೀಡಲಾಗಿತ್ತು. ಸಂಸ್ಥೆಯ ಅಧ್ಯಕ್ಷರು ಮೇಲೆ (2)ರಲ್ಲಿ ಓದಲಾದ ದಿನಾಂಕ:16.10.2004ರಲ್ಲಿ ಮನವಿ ಸಲ್ಲಿಸಿ 30 ಅಭ್ಯರ್ಥಿಗಳಿಗೆ ಬದಲಾಗಿ ಅನಿವಾರ್ಯ ಉಂಟಾದ ಕಾರಣ 50 ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಿದ್ದು ಇಷ್ಟು ಮಂದಿ ತರಬೇತಿ ನೀಡಲು ಅವಕಾಶ ಇರುವುದರಿಂದ 20 ಮಂದಿ ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಿರುವುದಕ್ಕೆ ಸರ್ಕಾರದ ಅನುಮತಿ ನೀಡಲು ಕೋರಿದ್ದಾರೆ. ಈ ಮನವಿಯನ್ನು ಪರಿಶೀಲಿಸಿದ ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತರ ಭಾಷಾ ಶಾಲೆಗಳು, ಬೆಂಗಳೂರು ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 1.1.2005ರ ಪತ್ರದಲ್ಲಿ 50 ಅಭ್ಯರ್ಥಿಗಳಿಗೆ ತರಬೇತಿ ನೀಡಲು ಸಂಸ್ಥೆಯು ಮೂಲಭೂತ ಸೌಲಭ್ಯಗಳನ್ನು ಹೊಂದಿರುವುದರಿಂದ ಹೆಚ್ಚುವರಿ 20 ಅಭ್ಯರ್ಥಿಗಳ ದಾಖಲಾತಿಗೆ ಅನುಮತಿ ನೀಡಬಹುದೆಂದು ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 31 ಯೋಸಕಾ 2004, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2005**

**(ಇಡಿ 125 ಸ್ವೀಮರ (ಯೂನಿಕ್) 2005, ದಿನಾಂಕ: 1ನೇ ಮಾರ್ಚ್ 2005)**

ಸರ್ಕಾರವು ವೀರಭಾರತಿ ಅಂಗವಿಕಲರ ಕ್ಷೇಮಾಭಿವೃದ್ಧಿ ಸಂಸ್ಥೆ, ಬಿಜಾಪುರ ಜಿಲ್ಲೆ ಈ ಸಂಸ್ಥೆಯು ಎಂ.ಸಿ.ಟಿ.ಟಿ. ತರಬೇತಿಗೆ 2004-05ನೇ ಸಾಲಿನಲ್ಲಿ 20 ಅಭ್ಯರ್ಥಿಗಳನ್ನು ಹೆಚ್ಚುವರಿಯಾಗಿ ದಾಖಲಿಸಿಕೊಂಡಿರುವುದಕ್ಕೆ ಮಾನವೀಯತೆಯ ದೃಷ್ಟಿಯಿಂದ ಈ ಮೂಲಕ ಘಟನೋತ್ತರ ಅನುಮತಿ ನೀಡುತ್ತದೆ ಇನ್ನು ಮುಂದೆ ಈ ರೀತಿ ಹೆಚ್ಚುವರಿ ದಾಖಲಾತಿ ಮಾಡುವುದರ ವಿರುದ್ಧ ಎಚ್ಚರಿಕೆ ನೀಡಲಾಗಿದೆ. 2004-05ನೇ ಸಾಲಿನಿಂದ ದಾಖಲಾತಿ

50ನ್ನು ಮೀರಬಾರದು. ಹಾಗೆಯೇ ರಿಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾದ ಮಾನ್ಯತೆಯನ್ನು ದಿನಾಂಕ: 2.6.2005 ರೊಳಗಾಗಿ ಪಡೆಯುವುದು. ಒಂದು ವೇಳೆ ಪುನಃ ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಲ್ಲಿ ಸಂಸ್ಥೆಯ ಪರವಾನಗಿಯನ್ನು ರದ್ದುಪಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.352 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, (ಯೋಜನೆ), ಶಿಕ್ಷಣ ಇಲಾಖೆ.

**ವಿಷಯ :** ಶ್ರೀ ರಂಗನಾಥ ಸ್ವಾಮಿ ಗ್ರಾಮೀಣ ಸೇವಾ ವಿದ್ಯಾಸಂಸ್ಥೆ, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ ಇವರಿಗೆ 20 ಹೆಚ್ಚುವರಿ ಅಭ್ಯರ್ಥಿಗಳನ್ನು ಸೇರಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 98 ಯೋಸಕಾ 2004, ದಿನಾಂಕ: 2.6.2004.
2. ಕಾರ್ಯದರ್ಶಿ, ಶ್ರೀ ರಂಗನಾಥ ಸ್ವಾಮಿ ಗ್ರಾಮೀಣ ಸೇವಾ ವಿದ್ಯಾಸಂಸ್ಥೆ, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ ಅವರ ಮನವಿ ದಿನಾಂಕ: 6.8.2004.
3. ಪತ್ರದ ಸಂಖ್ಯೆ: ಎಂಸಿ:ಎಂಸಿಟಿಟಿ:ಹೆದಾ: ಅ13/2004-05 ದಿನಾಂಕ: 5.10.2004 ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತರ ಭಾಷಾ ಶಾಲೆಗಳ ನಿರ್ದೇಶನಾಲಯ, ಬೆಂಗಳೂರು ಅವರಿಂದ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 2.06.2004ರ ಸರ್ಕಾರಿ ಆದೇಶದಲ್ಲಿ ಶ್ರೀ ರಂಗನಾಥ ಸ್ವಾಮಿ ಗ್ರಾಮೀಣ ಸೇವಾ ವಿದ್ಯಾಸಂಸ್ಥೆ, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ ಇವರಿಗೆ ಅಂಗವಿಕಲರ ಸಮನ್ವಯ ಶಿಕ್ಷಣದನ್ವಯ ಸಂಪನ್ಮೂಲ ಶಿಕ್ಷಕರ ಮಲ್ಟಿಕೆಟಗರಿ ಶಿಕ್ಷಣದ ಶಿಕ್ಷಕರ ತರಬೇತಿ (ಎಂ.ಸಿ.ಟಿ.ಟಿ) ಕೇಂದ್ರವನ್ನು 2004-05ನೇ ಶೈಕ್ಷಣಿಕ ವರ್ಷದಿಂದ ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡಿ ಅಭ್ಯರ್ಥಿಗಳ ದಾಖಲಾತಿ ಸಂಖ್ಯೆಯನ್ನು 30ಕ್ಕೆ ಸೀಮಿತಗೊಳಿಸಲಾಗಿತ್ತು. ಸದರಿ ವಿದ್ಯಾಸಂಸ್ಥೆಯ ಕಾರ್ಯದರ್ಶಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 6.8.2004ರ ತಮ್ಮ ಮನವಿಯಲ್ಲಿ ತಾವು 2004-05ನೇ ಸಾಲಿನಲ್ಲಿ 20 ಹೆಚ್ಚುವರಿ ಅಭ್ಯರ್ಥಿಗಳನ್ನು ನೇಮಿಸಿಕೊಂಡಿದ್ದು, ಇದಕ್ಕೆ ಅನುಮತಿ ನೀಡುವಂತೆ ಕೋರಿದ್ದಾರೆ. ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತರ ಭಾಷಾ ಶಾಲೆಗಳು ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 5.10.2004ರ ತಮ್ಮ ಪತ್ರದಲ್ಲಿ ಸದರೀ ವಿದ್ಯಾ ಸಂಸ್ಥೆಯು 50 ಅಭ್ಯರ್ಥಿಗಳಿಗೆ ಬೋಧಿಸಲು ಸಾಕಷ್ಟು ಮೂಲಭೂತ ಸೌಲಭ್ಯಗಳನ್ನು ಹೊಂದಿರುವುದರಿಂದ ಹೆಚ್ಚುವರಿ 20 ಅಭ್ಯರ್ಥಿಗಳನ್ನು 2004-05ನೇ ಸಾಲಿಗೆ ದಾಖಲಾತಿ ಮಾಡಿಕೊಂಡಿದ್ದು, ಅದಕ್ಕೆ ಅನುಮತಿ ನೀಡಬಹುದೆಂದು ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 98 ಯೋಸಕಾ 2004, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2005**

**(ಇಡಿ 123 ಸ್ವೀಮರ (ಯೂನಿಕ್) 2005, ದಿನಾಂಕ: 1ನೇ ಮಾರ್ಚ್ 2005)**

ಸರ್ಕಾರವು ಶ್ರೀ ರಂಗನಾಥ ಸ್ವಾಮಿ ಗ್ರಾಮೀಣ ಸೇವಾ ವಿದ್ಯಾಸಂಸ್ಥೆ, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ ಇವರು ಮಲ್ಟಿಕೆಟಗರಿ ಶಿಕ್ಷಕರ ತರಬೇತಿಗೆ (ಎಂಸಿಟಿಟಿ) 2004-05ನೇ ಸಾಲಿನಲ್ಲಿ 20 ಮಂದಿ ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಿರುವುದಕ್ಕೆ ಈ ಬಾರಿ ಮಾತ್ರ ಮಾನವೀಯತೆಯ ದೃಷ್ಟಿಯಿಂದ ಘಟನೋತ್ತರ ಮಂಜೂರಾತಿ ನೀಡುತ್ತದೆ. ಇನ್ನು ಮುಂದೆ ಈ ರೀತಿ ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಳ್ಳಕೂಡದೆಂದು ಈ ಮೂಲಕ ಸಂಸ್ಥೆಗೆ ಎಚ್ಚರಿಕೆ ನೀಡಲಾಗಿದೆ. ಪುನಃ ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಲ್ಲಿ ಅನುಮತಿಯನ್ನು ರದ್ದುಪಡಿಸಲಾಗುವುದು. 2004-05ನೇ ಸಾಲಿನಿಂದ ದಾಖಲಾತಿ 50ನ್ನು ಮೀರಬಾರದು ಹಾಗೆಯೇ ರಿಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾದ ಮಾನ್ಯತೆಯನ್ನು ದಿನಾಂಕ: 2.06.2005 ರೊಳಗಾಗಿ ಪಡೆಯುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.353 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, (ಯೋಜನೆ),

ಶಿಕ್ಷಣ ಇಲಾಖೆ.

**ವಿಷಯ :** ಮಾರ್ಗದರ್ಶನ ಸಂಸ್ಥೆ, ಹುನಗುಂದ, ಬಾಗಲಕೋಟೆ ಜಿಲ್ಲೆ ಇವರಿಗೆ ಎಂ.ಸಿ.ಟಿ.ಟಿ. ತರಬೇತಿಗಾಗಿ 20 ಹೆಚ್ಚುವರಿ ಅಭ್ಯರ್ಥಿಗಳನ್ನು ದಾಖಲು ಮಾಡಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 207 ಯೋಸಕಾ 2004, ದಿನಾಂಕ: 21.7.2004.
2. ಕಾರ್ಯದರ್ಶಿ, ಮಾರ್ಗದರ್ಶನ ಸಂಸ್ಥೆ, ಹುನಗುಂದ, ಬಾಗಲಕೋಟೆ ಜಿಲ್ಲೆ ಅವರ ಮನವಿ ದಿನಾಂಕ: 18.10.2004.
3. ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತರ ಭಾಷಾ ಶಾಲೆಗಳ ನಿರ್ದೇಶನಾಲಯ ಬೆಂಗಳೂರು ಅವರ ಪತ್ರದ ಸಂಖ್ಯೆ: ಎಂಸಿ1:ಎಂಸಿಟಿಟಿ: ಹೆದಾಅ:13:2004-05, ದಿನಾಂಕ: 01.01.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 21.07.2004ರ ಸರ್ಕಾರಿ ಆದೇಶದಲ್ಲಿ ಮಾರ್ಗದರ್ಶನ ಸಂಸ್ಥೆ, ಹುನಗುಂದ ಬಾಗಲಕೋಟೆ ಜಿಲ್ಲೆ ಇವರಿಗೆ ಹುನಗುಂದದಲ್ಲಿ 2004-05ನೇ ಶೈಕ್ಷಣಿಕ ವರ್ಷದಿಂದ ಅಂಗವಿಕಲರ ಸಮನ್ವಯ ಶಿಕ್ಷಣದನ್ವಯ ಸಂಪನ್ಮೂಲ ಶಿಕ್ಷಕರ ಎಂ.ಸಿ.ಟಿ.ಟಿ ತರಬೇತಿ ಕೇಂದ್ರವನ್ನು 30 ಅಭ್ಯರ್ಥಿಗಳನ್ನು ದಾಖಲಿಸಿಕೊಳ್ಳುವುದರೊಡನೆ ಪ್ರಾರಂಭಿಸಲು ಅನುಮತಿ ನೀಡಲಾಗಿತ್ತು. ಸಂಸ್ಥೆಯ ಕಾರ್ಯದರ್ಶಿಯವರ ಮೇಲೆ (2)ರಲ್ಲಿ ಓದಲಾದ ದಿನಾಂಕ: 18.10.2004ರಲ್ಲಿ ಮನವಿ ಸಲ್ಲಿಸಿ 30 ಅಭ್ಯರ್ಥಿಗಳಿಗೆ ಬದಲಾಗಿ ಸಂಸ್ಥೆಯು 50 ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಿದ್ದು ಇಷ್ಟು ಮಂದಿ ತರಬೇತಿ ನೀಡಲು ಅಗತ್ಯವಾದ ವ್ಯವಸ್ಥೆ ಇರುವುದರಿಂದ ಹೆಚ್ಚುವರಿ 20 ಅಭ್ಯರ್ಥಿಗಳನ್ನು ದಾಖಲು ಮಾಡಿಕೊಂಡಿರುವುದಕ್ಕೆ ಸರ್ಕಾರದ ಅನುಮತಿ ನೀಡುವಂತೆ ಕೋರಿದ್ದಾರೆ. ಈ ಮನವಿಯನ್ನು ಪರಿಶೀಲಿಸಿದ ನಿರ್ದೇಶಕರು, ಉರ್ದು ಮತ್ತು ಇತರೆ ಅಲ್ಪಸಂಖ್ಯಾತರ ಭಾಷಾ ಶಾಲೆಗಳು, ಬೆಂಗಳೂರು ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 1.1.2005ರ ಪತ್ರದಲ್ಲಿ 50 ಅಭ್ಯರ್ಥಿಗಳಿಗೆ ತರಬೇತಿ

ನೀಡಲು ಅಗತ್ಯವಾದಷ್ಟು ಮೂಲಭೂತ ಸೌಲಭ್ಯಗಳನ್ನು ಹೊಂದಿರುವುದರಿಂದ ಹೆಚ್ಚುವರಿ 20 ಅಭ್ಯರ್ಥಿಗಳ ದಾಖಲಾತಿಗೆ ಅನುಮೋದನೆ ನೀಡಲು ಶಿಫಾರಸ್ಸು ಮಾಡಿದ್ದಾರೆ. ಈ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 207 ಯೋಸಕಾ 2004, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2005**

**(ಇಡಿ 126 ಸ್ಕೀಮರ (ಯೂನಿಕ್) 2005, ದಿನಾಂಕ: 1ನೇ ಮಾರ್ಚ್ 2005)**

ಸರ್ಕಾರವು ಮಾರ್ಗದರ್ಶನ ಸಂಸ್ಥೆ, ಹುನಗುಂದ, ಬಾಗಲಕೋಟೆ ಜಿಲ್ಲೆ ಈ ಸಂಸ್ಥೆಯು 2004-05ನೇ ಸಾಲಿನಲ್ಲಿ ಎಂ.ಸಿ.ಟಿ.ಟಿ. ತರಬೇತಿಗೆ 20 ಮಂದಿ ಅಭ್ಯರ್ಥಿಗಳನ್ನು ಹೆಚ್ಚುವರಿಯಾಗಿ ದಾಖಲಿಸಿಕೊಂಡಿರುವುದಕ್ಕೆ ಮಾನವೀಯತೆಯ ದೃಷ್ಟಿಯಿಂದ ಇದೊಂದು ಸಾರಿ ಮಾತ್ರ ಘಟನೋತ್ತರ ಮಂಜೂರಾತಿ ನೀಡುತ್ತದೆ. ಇನ್ನು ಮುಂದೆ ಈ ರೀತಿ ಹೆಚ್ಚುವರಿ ದಾಖಲಾತಿ ಮಾಡುವುದರ ವಿರುದ್ಧ ಸಂಸ್ಥೆಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ 2004-05ನೇ ಸಾಲಿನಿಂದ ದಾಖಲಾತಿ 50ನ್ನು ಮೀರಬಾರದು ಹಾಗೆಯೇ ರಿಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾದ ಮಾನ್ಯತೆಯನ್ನು ದಿನಾಂಕ: 21.07.2005 ರೊಳಗಾಗಿ ಪಡೆಯುವುದು. ಒಂದು ವೇಳೆ ಹೆಚ್ಚುವರಿ ದಾಖಲು ಮಾಡಿಕೊಂಡಲ್ಲಿ ಅಥವಾ ಆರ್.ಸಿ.ಐ. ಮಾನ್ಯತೆ ಪಡೆಯದಿದ್ದಲ್ಲಿ ಸಂಸ್ಥೆಯ ಪರವಾನಗಿಯನ್ನೇ ರದ್ದುಪಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.354

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, (ಯೋಜನೆ), ಶಿಕ್ಷಣ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**CORRIGENDUM No. DPAR 1 SMR 2004 Bangalore dated: 4th March 2005**

In Notification No. DPAR 1 SMR 2004 dated: 27.11.2004 the words "Adarsha Hospital, Tumkur" appearing in Sl.No. 78 under item I shall be read as "Adarsha Nursing Home. Tumkur" and the words "Hubli Scan Centre, Dharwad" appearing in Sl.No. 13 under item II shall be read as "Hubli Scan Centre, Hubli".

By Order and in the name of the Governor of Karnataka,

**K. RAGHURAM BHANDARY**

PR-365

Under Secretary to Government-2,

Department of Personnel and Administrative Reforms, (Service Rules).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಎರಡು ಅಪರ ಕಾರ್ಯದರ್ಶಿ ಹುದ್ದೆಗಳನ್ನು ಜಂಟಿ ಕಾರ್ಯದರ್ಶಿ ಹುದ್ದೆಗಳೆಂದು ನಿಮ್ನೀಕರಿಸುವ ಬಗೆಗೆ.

**ಓದಲಾಗಿದೆ :** 1. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 131 ಸಅಸೇ 2004 ದಿನಾಂಕ: 8.7.2004.

2. ಟಿಪ್ಪಣಿ ಸಂಖ್ಯೆ: ಡಿಪಿಎಎಲ್ 1733 ಸೆಕ್ರೆಟರಿ 2004 ದಿನಾಂಕ: 31.7.2004.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅಪರ ಪ್ರಾರೂಪಕಾರ ಹಾಗೂ ಪದನಿಮಿತ್ತ ಅಪರ ಕಾರ್ಯದರ್ಶಿ ಹುದ್ದೆಯನ್ನು ಬಡ್ತಿ ಮೂಲಕ ತುಂಬುವ ಪ್ರಸ್ತಾವನೆಗೆ ಸಂಬಂಧಪಟ್ಟಂತೆ, ದಿನಾಂಕ: 16.6.2004 ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಡವಳಿಗಳ ಅನ್ವಯ, ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರುವ ಬಗ್ಗೆ ಪರಿಶೀಲಿಸಿ ಅಭಿಪ್ರಾಯವನ್ನು ನೀಡುವಂತೆ, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 8.7.2004ರ ಅನಧಿಕೃತ ಟಿಪ್ಪಣಿಯನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕಾರ್ಯದರ್ಶಿಗಳನ್ನು ಕೋರಲಾಗಿದ್ದಿತು.

ಇದಕ್ಕೆ ಉತ್ತರವಾಗಿ, ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರು ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 31.7.2004ರ ಟಿಪ್ಪಣಿಯಲ್ಲಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರುವ ಬಗ್ಗೆ ಕೆಲವು ಸಲಹೆಗಳನ್ನು ಸೂಚಿಸಿರುತ್ತಾರೆ. ಇದರಲ್ಲಿ, ಪ್ರಸ್ತುತ ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಅಪರ ಪ್ರಾರೂಪಕಾರ ಹಾಗೂ ಪದನಿಮಿತ್ತ ಅಪರ ಕಾರ್ಯದರ್ಶಿ ವೃಂದದ 3 ಹುದ್ದೆಗಳಲ್ಲಿ 2 ಹುದ್ದೆಗಳನ್ನು ಜಂಟಿ ಪ್ರಾರೂಪಕಾರ ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ ಹುದ್ದೆಯನ್ನಾಗಿ ನಿಮ್ನೀಕರಿಸಿ, ಆ ಹುದ್ದೆಗಳಿಗೆ ಸಹಾಯಕ ಪ್ರಾರೂಪಕಾರ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಕನಿಷ್ಟ 3 ವರ್ಷಗಳ ಸೇವೆ ಸಲ್ಲಿಸಿರುವವರಿಗೆ ಬಡ್ತಿ ನೀಡುವುದೂ ಸೇರಿರುತ್ತದೆ.

ಆದುದರಿಂದ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಲ್ಲಿ ಪ್ರಸ್ತುತವಿರುವ 3 ಅಪರ ಪ್ರಾರೂಪಕಾರ ಹಾಗೂ ಪದನಿಮಿತ್ತ ಅಪರ ಕಾರ್ಯದರ್ಶಿ ಹುದ್ದೆಗಳಲ್ಲಿ 3 ಹುದ್ದೆಗಳನ್ನು ಜಂಟಿ ಪ್ರಾರೂಪಕಾರ ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ ಹುದ್ದೆಯನ್ನಾಗಿ ನಿಮ್ನೀಕರಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 141 ಸಅಸೇ 2004, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ರೂ.13820-17220ರ ವೇತನ ಶ್ರೇಣಿಯ 3 (ಮೂರು) ಅಪರ ಪ್ರಾರೂಪಕಾರ ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಗಳ ಪೈಕಿ ಎರಡು (2) ಹುದ್ದೆಗಳನ್ನು ರೂ. 12800-16720ರ ವೇತನ ಶ್ರೇಣಿಯ ಜಂಟಿ ಪ್ರಾರೂಪಕಾರ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗಳೆಂದು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಮ್ನೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.366

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವೆಗಳು-2).